5. <u>ನೇಮಕಾತಿ ವಿಧಾನ:–</u>

ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ರಡಿಯಲ್ಲಿ ಅಭ್ಯರ್ಥಿಗಳು ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಪಡೆದ ಒಟ್ಟು ಶೇಕಡವಾರು ಅಂಕಗಳ ಹಾಗೂ ಆಯೋಗವು ನಡೆಸುವ ಸಂದರ್ಶನದಲ್ಲಿ ಪಡೆದ ಅಂಕಗಳ ಜೇಷ್ಟತೆಯ ಆಧಾರದ ಮೇಲೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ಆಯ್ಕೆ ಮಾಡಲಾಗುವುದು.

ಸಂದರ್ಶನ ನಡೆಸುವ ಉದ್ದೇಶ ಎಂದರೆ ಅಭ್ಯರ್ಥಿಗಳು ಆಯ್ಕೆ ಬಯಸಿದ ಹುದ್ದೆಗೆ ಅವರ ಅರ್ಹತೆ, ವ್ಯಕ್ತಿತ್ವ, ಸಂಬಂಧಿತ ವಿಷಯದಲ್ಲಿ ವ್ಯಕ್ತಪಡಿಸುವ ಸಾಮರ್ಥ್ಯತೆ, ಸೂಕ್ಶ್ಮತೆ ಮತ್ತು ಕರ್ತೃತ್ವ ಶಕ್ತಿ, ಸಾಮಾನ್ಯ ಜ್ಞಾನ ಹಾಗೂ ವಿಷಯದಲ್ಲಿನ ಪರಿಜ್ಞಾನ ಹಾಗೂ ಇನ್ನಿತರ ವಿಶೇಷ ಗುಣಗಳನ್ನು ನಿರ್ಧರಿಸುವುದೇ ಆಗಿದೆ.

ಅ) ಸಂದರ್ಶನಕ್ಕೆ ನಿಗದಿಪಡಿಸಲಾದ ಗರಿಷ್ಟ ಅಂಕಗಳು 15 (ಹದಿನೈದು)

ಹುದ್ದೆಗಳನ್ನು ನೇಮಕಾತಿ ನಿಯಮಗಳನ್ವಯ ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯಲ್ಲಿ ಪಡೆದ ಶೇಕಡವಾರು ಅಂಕಗಳ ಜೇಷ್ಟತೆಯ ಆಧಾರದ ಮೇಲೆ 1:5 ಅನುಪಾತದಲ್ಲಿ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಆಹ್ವಾನಿಸಲಾಗುವುದು. ಅಭ್ಯರ್ಥಿಗಳು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

**6. ಶೈಕ್ಷಣಿಕ ವಿದ್ಯಾರ್ಹತೆ ಮತ್ತು ವಯೋಮಿತಿ:–**

6.1 **ಶೈಕ್ಷಣಿಕ ವಿದ್ಯಾರ್ಹತೆ:–** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅನುಸೂಚಿಯಲ್ಲಿ ಹುದ್ದೆಯ ಮುಂದೆ ಸೂಚಿಸಿರುವ ಕನಿಷ್ಠ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಲೇಬೇಕು. ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದದೆ ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿದ್ದರೂ ಸಹ ಪರಿಗಣಿಸಲಾಗುವುದಿಲ್ಲ.

6.2 **ವಯೋಮಿತಿ:–** ಅನುಸೂಚಿಯಲ್ಲಿ ಹುದ್ದೆಯ ಮುಂದೆ ಸೂಚಿಸಿದಂತೆ, ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ ವಯೋಮಿತಿಯನ್ನು ಹೊಂದಿರಬೇಕು ಹಾಗೂ ನಿಗದಿತ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

(ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. (ಈ ಉಪ ಕಂಡಿಕೆಗೆ ಸಂಬಂಧಿಸಿದ ವಿವರಣೆಗಳಿಗೆ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮಗಳು 2 ಮತ್ತು 9 ರನ್ವಯ ಅರ್ಥೈಸಿಕೊಳ್ಳುವುದು)

(ಇ) ಅಭ್ಯರ್ಥಿಗಳು ನ್ಯಾಷನಲ್ ಕ್ಯಾಡಿಟ್ ಕೋರ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷನಾಗಿ ಅವನು ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಈ) ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡ ಗ್ರಾಮ ಸಮೂಹ ಪರಿಶೀಲಿಕನಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅವನು / ಅವಳು ಅಂತಹ ಗ್ರಾಮ ಪರಿಶೀಲಿಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಉ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

(ಊ) ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು

(ಋ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.

(ೠ)ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು.

ಉಪ ಕಂಡಿಕೆ 6.2.(ೠ) ರ ಮೇರೆಗೆ ವಯೋಮಿತಿಯ ಸಡಿಲಿಕೆಯನ್ನು ಕೋರುವ ಅಭ್ಯರ್ಥಿಯು ಜೀತ ಕಾರ್ಮಿಕ ನಾಗಿದ್ದು, ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶ'ದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು.

7. **ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು :–**

ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು:–

ಅ) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ ' ಡಿ ' ನಲ್ಲಿ

ಆ) ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ ' ಇ ' ನಲ್ಲಿ

ಇ) ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿ ಅರ್ಜಿ ಸಲ್ಲಿಸುವ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್ ರವರಿಂದ ಪಡೆದು ಅದರ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ನಿಯಮಾನುಸಾರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು 'ಮಾಹಿತಿ ಪುಸ್ತಕದಲ್ಲಿ' ತೋರಿಸಲಾಗಿದೆ)

**8. ಗ್ರಾಮೀಣ ಅಭ್ಯರ್ಥಿ:**

ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ರ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದು ಅದರ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವ'ನ್ನು ನಮೂನೆ–2ರಲ್ಲಿ ನಿಗದಿತ ಪ್ರಾಧಿಕಾರಿಗಳಿಂದ ಪಡೆದು ಅದರ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು (ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅಂತಹವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ). (ಈ ಪ್ರಮಾಣ ಪತ್ರಗಳ ನಮೂನೆಗಳನ್ನು 'ಮಾಹಿತಿ ಪುಸ್ತಕದಲ್ಲಿ' ತೋರಿಸಲಾಗಿದೆ)

9. **ಕನ್ನಡ ಮಾಧ್ಯಮ ಅಭ್ಯರ್ಥಿ**

ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧ ಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರದ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು (ಈ ಪ್ರಮಾಣ ಪತ್ರದ ನಮೂನೆಯನ್ನು "ಮಾಹಿತಿ ಪುಸ್ತಕದಲ್ಲಿ" ತೋರಿಸಲಾಗಿದೆ).

**10. ಯೋಜನೆಗಳಿಂದ ನಿರಾಶ್ರಿತ ಅಭ್ಯರ್ಥಿ**

ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್‌ರವರು ನೀಡಿದ ಪ್ರಮಾಣ ಪತ್ರದ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. (ಈ ಪ್ರಮಾಣ ಪತ್ರದ ನಮೂನೆಯನ್ನು " ಮಾಹಿತಿ ಪುಸ್ತಕದಲ್ಲಿ " ತೋರಿಸಲಾಗಿದೆ).

11. **ನಿಗದಿತ ಶುಲ್ಕ:–** ಶುಲ್ಕ ಪಾವತಿ ಮಾಡುವ ರೀತಿ ಹಾಗೂ ಭರ್ತಿ ಮಾಡಿದ ಅರ್ಜಿ ಸಲ್ಲಿಸಬೇಕಾದ ಸ್ಥಳದ ವಿವರ:–

11.1 ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), ಪ್ರವರ್ಗ–2(ಬಿ), ಪ್ರವರ್ಗ–3(ಎ), ಪ್ರವರ್ಗ–3(ಬಿ) ನ ಅಭ್ಯರ್ಥಿಗಳಿಗೆ ರೂ. 300/–

11.2 ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಸಂದರ್ಶನದಲ್ಲಿ ಪಡೆದ ಅಂಕಗಳ ಪೂರೈಕೆಗಾಗಿ ಶುಲ್ಕ ರೂ. 100/–ನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

11.3 ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ಇದೇ ಅಧಿಸೂಚನೆಯ ಕಂಡಿಕೆ 3 ರಲ್ಲಿ ಸೂಚಿಸಿರುವ ಆಯೋಗದ ಕಛೇರಿಗಳಲ್ಲಿ ಮೇಲೆ ತಿಳಿಸಿರುವ ಶುಲ್ಕವನ್ನು ನಗದು/ಐಪಿಒ/ಡಿಡಿ ಮೂಲಕ ಪಾವತಿಸಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಖುದ್ದಾಗಿ ಸಲ್ಲಿಸತಕ್ಕದ್ದು. ಅಂಚೆ ಮೂಲಕ ಅರ್ಜಿಗಳನ್ನು ಸಲ್ಲಿಸಬಯಸುವ ಅಭ್ಯರ್ಥಿಗಳು ಆಯೋಗದ ಕೇಂದ್ರ ಕಛೇರಿ, ಉದ್ಯೋಗ ಸೌಧ, ಬೆಂಗಳೂರು–560001, ಇಲ್ಲಿಗೆ ಮಾತ್ರ ಅರ್ಜಿ ಸ್ವೀಕರಿಸಲು ನಿಗದಿತ ಕೊನೆಯ ದಿನಾಂಕದೊಳಗೆ ಸಲ್ಲಿಸತಕ್ಕದ್ದು. ನಂತರ ಬರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

11.4 ಯಾವುದೇ ಅಭ್ಯರ್ಥಿಗಳು ಮೇಲೆ ತಿಳಿಸಿರುವ ಶುಲ್ಕವನ್ನು ಪಾವತಿಸದಿದ್ದಲ್ಲಿ ಅಂತಹವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

12. **ಪ್ರಾಮುಖ್ಯವಾದ ಸೂಚನೆಗಳು:**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಮೀಸಲಾತಿ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ಅಭ್ಯರ್ಥಿಗಳು ಅರ್ಜಿಯೊಂದಿಗೆ ದೃಢೀಕರಿಸಿದ ಪ್ರಮಾಣ ಪತ್ರಗಳನ್ನು ಲಗತ್ತಿಸಿದ ಬಗ್ಗೆ ಅರ್ಜಿಯೊಂದಿಗೆ ಸ್ವೀಕೃತಿ ಪತ್ರದಲ್ಲಿ (ದ್ವಿಪ್ರತಿಯಲ್ಲಿ)

ನೀಡಲಾಗಿರುವ ಕ್ರಮಸಂಖ್ಯೆಗಳ ಪಕ್ಕದಲ್ಲಿರುವ ಬಾಕ್ಸ್‌ನಲ್ಲಿ "ಲಗತ್ತಿಸಿದೆ" ಎಂಬುದಾಗಿಯೂ ಹಾಗೂ ಕೇಳಿರುವ ಯಾವುದೇ ಪ್ರಮಾಣ ಪತ್ರವನ್ನು ಲಗತ್ತಿಸದೇ ಇದ್ದಲ್ಲಿ "ಲಗತ್ತಿಸಿಲ್ಲ" ಎಂಬುದಾಗಿ ಸ್ಪಷ್ಟವಾಗಿ ಬರೆಯತಕ್ಕದ್ದು.

1) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ /ಸೆಮಿಸ್ಟರ್‌ಗಳ ಅಂಕಪಟ್ಟಿಗಳು ಹಾಗೂ ಘಟಿಕೋತ್ಸವದ ಪ್ರಮಾಣ ಪತ್ರಗಳು /ಗ್ರೇಡ್‌ನ್ನು ಶೇಕಡವಾರು ಅಂಕಗಳಿಗೆ ಪರಿವರ್ತಿಸಿದ ಪ್ರಮಾಣ ಪತ್ರ
2) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆ ಪ್ರಮಾಣ ಪತ್ರ/ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ.
3) ಹುದ್ದೆಗೆ ಅನುಭವ / ತರಬೇತಿ ನಿಗದಿಪಡಿಸಿದ್ದಲ್ಲಿ ಅದರ ಪ್ರಮಾಣ ಪತ್ರಗಳು
4) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕ್ಲೇಮ್ ಮಾಡಿದ್ದಲ್ಲಿ)
5) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಮತ್ತು ಪ್ರವರ್ಗ–3ಬಿಗಳ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ (ಮೀಸಲಾತಿ ಕ್ಲೇಮ್ ಮಾಡಿದ್ದಲ್ಲಿ)
6) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಮೀಸಲಾತಿ ಕ್ಲೇಮ್ ಮಾಡಿದ್ದಲ್ಲಿ)
7) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕ್ಲೇಮ್ ಮಾಡಿದ್ದಲ್ಲಿ)
8) ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕ್ಲೇಮ್ ಕೋರಿದ್ದಲ್ಲಿ)
9) ಯೋಜನೆಗಳಿಂದ ನಿರಾಶ್ರಿತರಾದ ಅಭ್ಯರ್ಥಿಯ ಪ್ರಮಾಣ ಪತ್ರ (ಮೀಸಲಾತಿ ಕ್ಲೇಮ್ ಮಾಡಿದ್ದಲ್ಲಿ)
10) ಹೌಸ್‌ಮೆನ್‌ಷಿಪ್ / ಇಂಟರ್ನ್‌ಷಿಪ್ ಪೂರ್ಣಗೊಳಿಸಿದ ಪ್ರಮಾಣ ಪತ್ರ (ನಿಗದಿಪಡಿಸಿದಲ್ಲಿ)
11) ರ್‍ಯಾಂಕ್ ಪ್ರಮಾಣ ಪತ್ರ ನಿಗದಿಪಡಿಸಿದಲ್ಲಿ)
12) ದೇಹ ದಾರ್ಢ್ಯತೆಯ ಪ್ರಮಾಣ ಪತ್ರ (ನಿಗದಿಪಡಿಸಿದಲ್ಲಿ)
13) ಎನ್.ಇ.ಟಿ./ಎಸ್.ಎಲ್.ಇ.ಟಿ. /ಸಿ.ಎಸ್.ಐ.ಆರ್/ಎಂ.ಫಿಲ್/ಪಿ.ಹೆಚ್.ಡಿ./ಗೇಟ್ ಪ್ರಮಾಣ ಪತ್ರ (ನಿಗದಿಪಡಿಸಿದಲ್ಲಿ)

13. **<u>ಆಯೋಗದೊಡನೆ ಪತ್ರ ವ್ಯವಹಾರ:</u>**

ಆಯೋಗವು ಅಭ್ಯರ್ಥಿಕೆಯ ವಿಚಾರದಲ್ಲಿ ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ವಿಳಾಸ ಬದಲಾವಣೆ ಇದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.

ಅಭ್ಯರ್ಥಿಗಳು ಆಯೋಗದೊಡನೆ ಸಂಪರ್ಕಿಸಬೇಕಾದ ಸಂದರ್ಭದಲ್ಲಿ ತಮ್ಮ ಮನವಿಯಲ್ಲಿ ಕೆಳಕಂಡ ಮಾಹಿತಿಗಳನ್ನು ಒಳಗೊಂಡಿರಬೇಕು:–

(i) ಹುದ್ದೆಯ ಹೆಸರು
(ii) ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)
(iii) ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ

14. **<u>ಇತರೆ ಸೂಚನೆಗಳು:–</u>**

(1) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.
(2) ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಗಳನ್ನು ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ದೃಢೀಕರಿಸಿ ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಸಲ್ಲಿಸತಕ್ಕದ್ದು. ಕೊನೆಯ ದಿನಾಂಕದ ನಂತರ ಸ್ವೀಕರಿಸಿದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
(3) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**<u>15. ದುರ್ನಡತೆ:–</u>** ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಸಂದರ್ಶನದಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅವನು / ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ, ಹುದ್ದೆಯ ಸಂದರ್ಶನದಿಂದ / ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**ಅನುಸೂಚಿ**

**ಅಧಿಸೂಚನೆ ಸಂಖ್ಯೆ:ಆರ್(2) 3100 /2006–07/ಪಿಎಸ್‌ಸಿ ದಿನಾಂಕ: 27–12–2006**

**ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 27–01–2007**

| ಹುದ್ದೆಗಳ ಅನುಕ್ರಮ ಸಂಖ್ಯೆ | ಇಲಾಖೆಯ ಹೆಸರು ಹುದ್ದೆಯ ಪದನಾಮ ಮತ್ತು ಸಂಖ್ಯೆ | ವೇತನ ಶ್ರೇಣಿ | ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆ | ವಯೋಮಿತಿ (ವಯಸ್ಸು ವರ್ಷಗಳಲ್ಲಿ) | ಹುದ್ದೆಗಳ ವರ್ಗೀಕರಣ |
|---|---|---|---|---|---|
| (1) | (2) | (3) | (4) | (5) | (6) |
| 536–553 | ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿ 18 ಸಹಾಯಕ ಗ್ರಂಥಪಾಲಕರ ಹುದ್ದೆಗಳು | ರೂ.4150–7800 | 1) Should the Board of Technical Education OR equivalent qualification award holder of Diploma in Library Science;<br>2) Should have not less than one year experience in a Library recognised by Government.<br><br>1) ಡಿಪ್ಲೋಮಾ ಇನ್ ಲೈಬ್ರರಿ ಸೈನ್ಸ್ ಅಥವಾ ತತ್ಸಮಾನ ವಿದ್ಯಾರ್ಹತೆ (ತಾಂತ್ರಿಕ ಶಿಕ್ಷಣ ಮಂಡಳಿ);<br>2) ಸರ್ಕಾರದಿಂದ ಅಂಗೀಕೃತವಾದ ಗ್ರಂಥಾಲಯದಲ್ಲಿ ಒಂದು ವರ್ಷ ಅನುಭವ ಹೊಂದಿರಬೇಕು. | <u>ವಯಸ್ಸು ವರ್ಷಗಳಲ್ಲಿ</u><br>ಕನಿಷ್ಠ – 18<br>ಗರಿಷ್ಠ – 45<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ – 48<br>ಪ.ಜಾ, ಪ.ಪಂ, ಪ್ರ 1 – 50 | (see classification table below) |

| ಮೀಸಲಾತಿ | ಇ | ಮ | ಗ್ರಾ | ಮಾ.ಸೈ | ಕ.ಮಾ.ಅ | ಯೋ.ಅ | ಒಟ್ಟು |
|---|---|---|---|---|---|---|---|
| ಪ.ಜಾ | 01 | 01 | 01 | – | – | – | 03 |
| ಪ್ರ–1 | – | 01 | – | – | – | – | 01 |
| 2(ಎ) | 01 | 01 | 01 | – | – | | 03 |
| 2(ಬಿ) | – | 01 | – | – | – | – | 01 |
| 3(ಬಿ) | 01 | – | – | – | – | – | 01 |
| ಸಾ.ಅ. | 01 | 03 | 02 | 01 | 01 | 01 | 09 |
| ಒಟ್ಟು | 04 | 07 | 04 | 01 | 01 | 01 | 18 |

ಮಹಿಳೆಯರಿಗೆ / ಮಾಜಿ ಸೈನಿಕರಿಗೆ / ಗ್ರಾಮೀಣ ಅಭ್ಯರ್ಥಿಗಳಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

**ಸಂಕ್ಷೇಪ:–** ಇ – ಇತರೆ / ಮ – ಮಹಿಳೆ / ಗ್ರಾ – ಗ್ರಾಮೀಣ / ಮಾ.ಸೈ – ಮಾಜಿ ಸೈನಿಕ / ಕ..ಮಾ.ಅ. – ಕನ್ನಡ ಮಾಧ್ಯಮದ ಅಭ್ಯರ್ಥಿ/ಪ.ಜಾ – ಪರಿಶಿಷ್ಟ ಜಾತಿ / ಪ.ಪಂ. –ಪರಿಶಿಷ್ಟ ಪಂಗಡ / ಪ್ರ.–ಪ್ರವರ್ಗ /ಸಾ.ಅ.–ಸಾಮಾನ್ಯ ಅರ್ಹತೆ / ಯೋ.ಅ – ಯೋಜನೆಗಳಿಂದ ನಿರಾಶ್ರಿತ

**ಬಿ.ಎಸ್. ರಾಮಪ್ರಸಾದ್**
ಕಾರ್ಯದರ್ಶಿ,
ಕರ್ನಾಟಕ ಲೋಕ ಸೇವಾ ಆಯೋಗ.

ಪಿ.ಆರ್. 812

**ಲೋಕೋಪಯೋಗಿ ಇಲಾಖೆ**
**ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ**
**ಅಲ್ಪಾವಧಿ ಟೆಂಡರ್ ಪ್ರಕಟಣೆ (ಎರಡು ಲಕೋಟೆ ಪದ್ಧತಿಯಲ್ಲಿ)**
**ಸಂಖ್ಯೆ: ಇಎನ್‌ಹೆಚ್/ಚಿ/ಸ.ಇ-2/ಟೆಂ.ಪ್ರ/ಸೇತುವೆ/2006-07/4153, ದಿನಾಂಕ: 11ನೇ ಡಿಸೆಂಬರ್ 2006**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೋಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಎರಡು ಲಕೋಟೆ ಪದ್ಧತಿಯಲ್ಲಿ (1) ತಾಂತ್ರಿಕ ಬಿಡ್ (ಭಾಗ-1) ಮತ್ತು (2) ಆರ್ಥಿಕ ಬಿಡ್ (ಭಾಗ-2) ಗಳಾಗಿರುತ್ತವೆ. ಬಿಡ್‌ಗಳನ್ನು ಎರಡು ಭಾಗಗಳಲ್ಲಿ ಎರಡು ಮೊಹರಾದ ಹಾಗೂ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ಪ್ರತ್ಯೇಕವಾಗಿ ನಮೂದಿಸಲ್ಪಟ್ಟ ಲಕೋಟೆಗಳನ್ನು ಮತ್ತೊಂದು ಮೊಹರಾದ ಲಕೋಟೆಯಲ್ಲಿಟ್ಟು ಹಾಗೂ ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ: 16.01.2007 ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ತಾಂತ್ರಿಕ ಬಿಡ್ ಭಾಗ-1 ನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು, ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದಂಥ ಗುತ್ತಿಗೆದಾರರ ಆರ್ಥಿಕ ಬಿಡ್ ಲಕೋಟೆಗಳನ್ನು ಮಾತ್ರ ತೆರೆಯಲಾಗುತ್ತದೆ. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

ಟೆಂಡರು ಕರೆ ಸಂಖ್ಯೆ :: ಮೊದಲನೇ ಕರೆ

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿ ಪಡಿಸಿದ ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ + ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಹೊರತುಪಡಿಸಿ) |
|---|---|---|---|---|---|---|
| 1 | ರಾಷ್ಟ್ರೀಯ ಹೆದ್ದಾರಿ-13 ಸೊಲ್ಲಾಪುರ-ಮಂಗಳೂರು ಸೆಕ್ಷನ್, ಕಿ.ಮೀ.427/3 @ ಕಿ.ಮೀ. 426.890 ಯಲ್ಲಿ ಸೇತುವೆ ಮರು ನಿರ್ಮಾಣದ ಕಾಮಗಾರಿ | 88.00 | 88,000/- | ರೂ.9000 + 12.5% ವ್ಯಾಟ್ | ಸೇತುವೆಗಳ ಮರು ನಿರ್ಮಾಣದ ಕಾಮಗಾರಿ | 11 ತಿಂಗಳು (ಮಳೆಗಾಲ ಹೊರತುಪಡಿಸಿ) |
| 2 | ರಾಷ್ಟ್ರೀಯ ಹೆದ್ದಾರಿ-13 ಸೊಲ್ಲಾಪುರ-ಮಂಗಳೂರು ಸೆಕ್ಷನ್, ಕಿ.ಮೀ.448/3 @ ಕಿ.ಮೀ. 447.582 ಯಲ್ಲಿ ಸೇತುವೆ ಮರು ನಿರ್ಮಾಣದ ಕಾಮಗಾರಿ | 69.00 | 69,000/- | ರೂ.7,000 + 12.5% ವ್ಯಾಟ್ | ಸೇತುವೆ ಮರು ನಿರ್ಮಾಣದ ಕಾಮಗಾರಿ | 11 ತಿಂಗಳು (ಮಳೆಗಾಲ ಹೊರತುಪಡಿಸಿ) |

**ಷರತ್ತುಗಳು:** 1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿ.ಡಿ.ಯನ್ನು ಕಾರ್ಯನಿರ್ವಾಹಕ ಅಭಿಯಂತರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು. ಗುತ್ತಿಗೆದಾರರು ಗುತ್ತಿಗೆದಾರರ ನೋಂದಾವಣಿ ಪತ್ರದ ಪ್ರತಿ, ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು) ಹಾಗೂ ಕಾಮಗಾರಿಗೆ ನಿಗದಿಪಡಿಸಿದ ಯಂತ್ರೋಪಕರಣಗಳ ಮಾಲೀಕತ್ವದ ಪ್ರಮಾಣ ಪತ್ರಗಳು, ಈ ಎಲ್ಲಾ ದಾಖಲೆಗಳನ್ನು, ವಿಭಾಗ ಮಟ್ಟದ ಅಧಿಕಾರಿಗಳಿಗೆ ಕಡಿಮೆಯಿಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**2) ಟೆಂಡರು ದಿನಾಂಕದ ವಿವರಗಳು ಈ ಕೆಳಕಂಡಂತಿವೆ.**

| | | |
|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಹಾಗೂ ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ಕೊನೆಯ ದಿನಾಂಕ: | 12.01.2007 ಕಛೇರಿ ವೇಳೆಯಲ್ಲಿ. (ರಜಾ ದಿನಗಳನ್ನು ಹೊರತುಪಡಿಸಿ) |
| ಆ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ: | 16.01.2007, ಮಧ್ಯಾಹ್ನ 4.00 ಗಂಟೆಯ ವರೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಇ) | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 16.01.2007, ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಈ) | ತಾಂತ್ರಿಕವಾಗಿ ಅರ್ಹವಾದ ತಾಂತ್ರಿಕ ಬಿಡ್‌ಗಳ ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 23.01.2007, ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |

**ತಾಂತ್ರಿಕ ಬಿಡ್‌ಗಳಿಗೆ ಷರತ್ತುಗಳು:**

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ.: ಎಫ್.ಡಿ.ಆರ್.: ಪೇ ಆರ್ಡರ್ : ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ

ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ವನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ-66 ದಕ್ಕೆ ಅನುಗುಣವಾಗಿರತಕ್ಕದ್ದು.

2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀಚಿನ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು : ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ : ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ. : ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.

3. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವವನ್ನು ಹೊಂದಿರಬೇಕು ಹಾಗೂ ತಾಂತ್ರಿಕ ಬಿಡ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲೀಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು. ಮೇಲಿನ ಮಾಲೀಕತ್ವದ ಸಾಕ್ಷಿ ಗಳಿಲ್ಲದ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲೀಕತ್ವದ ಪುರಾವೆಗಳು |
|---|---|---|---|
| 1) | 40/60 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ (ಎಂ.ಓ.ಆರ್.ಟಿ. ಮತ್ತು ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | ಒಂದು (1) | ಖರೀದಿಸಿದ ಇನ್‌ವಾಯ್ಸ್ : ಸೆಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 2) | ಪೇವರ್ ಫಿನೀಷರ್ | ಒಂದು (1) | - ಸದರಿ - |
| 3) | ವೈಬ್ರೇಟರಿ ರೋಲರ್ | ಒಂದು (1) | - ಸದರಿ - |
| 4) | ಸ್ಟ್ಯಾಟಿಕ್ ರೋಡ್‌ರೋಲರ್ | ಎರಡು (2) | - ಸದರಿ - |
| 5) | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | - ಸದರಿ - |
| 6) | ಟಿಪ್ಪರ್‌ಗಳು | ನಾಲ್ಕು (4) | ಆರ್.ಟಿ.ಓ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್ |
| 7) | ಎಕ್ಸ್‌ವೇಟರ್ | ಒಂದು (1) | ಮಾಲೀಕತ್ವದ ಪ್ರಮಾಣ ಪತ್ರ |
| 8) | ಕಾಂಕ್ರೀಟ್ ಮಿಕ್ಸರ್‌ಗಳು | ಎರಡು (2) | ಖರೀದಿಸಿದ ಇನ್‌ವಾಯ್ಸ್ : ಸೆಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 9) | ವೈಬ್ರೇಟರ್‌ಗಳು | ಎರಡು (2) | - ಸದರಿ - |
| 10) | ಸೆಂಟ್ರಿಂಗ್ ಸಾಮಾಗ್ರಿಗಳು | ಕಾಮಗಾರಿಗೆ ಅವಶ್ಯವಿರುವಷ್ಟು | ಖರೀದಿಸಿದ ಇನ್‌ವಾಯ್ಸ್ : ಸೆಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |

4. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.

5. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್‌ಅನ್ನು" ಕಡ್ಡಾಯವಾಗಿ ತಾಂತ್ರಿಕ ಬಿಡ್‌ನಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್‌ಅನ್ನು" ಸಲ್ಲಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.

6. ತಾಂತ್ರಿಕ ಬಿಡ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಬಿಡ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

7. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು : ಏಜೆನ್ಸಿಗಳು : ಸಂಸ್ಥೆಯ ಪ್ರೊಫೈಲ್‌ಅನ್ನು ಲಗತ್ತಿಸತಕ್ಕದ್ದು.

8. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.

9. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.

10. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.

11. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಬಿ. ಪ್ರಭಾಕರಶೆಟ್ಟಿ**

ಪಿ.ಆರ್. 802 ಕಾರ್ಯಪಾಲಕ ಅಭಿಯಂತರು, ರಾ.ಹೆ.ವಿಭಾಗ, ಚಿತ್ರದುರ್ಗ.

**IN THE COURT OF THE IV ADDL CITY CIVIL JUDGE, MAYOHALL, BANGALORE**
**P.& S.C. 15050/2006**

**Petitioners:**

1. Smt. Sumithra .S, W/o Late V.Satish, aged 29 years,
2. Baby Soundharya .S, D/o Late V.Satish, Since minor rep: by her mother and natural guardian Smt. Sumithra S. the Petitioner No.1 herein.

} both are R/at.

R/at. No.862/A, 14th Cross, Indiranagar 2nd Stage, Bangalore-38.

V/s.

**Respondent:** - NIL -

**PUBLIC NOTICE**

Notice is hereby given that a petition has been made to this court U/s. 372 of the Indian Succession Act for grant of Succession Certificate in respect of the debts and securities of the deceased V.Satish who died at Bangalore on 25.09.2005 at Bangalore.

Be it known that, no caveat has been entered and the petition is posted for hearing on **04.01.2007.** All persons claiming to have any interest, with assets of the deceased may come and participate in the proceedings before grant of Succession Certificate.

Given under my hand and seal of this court dated: 19th day of December 2006.

By order of the court,
Deputy Registrar,
City Civil Court, Mayohall Unit, Bangalore.

**IN THE COURT OF THE IV ADDL CITY CIVIL JUDGE, MAYOHALL, BANGALORE**
**P.& S.C. 15052/2006**

**Petitioners:**

1. A. Jabbar, S/o Late Khan Saheb Abdul Gani R/o. No.105, Richmond Circle, Bangalore-2.
2. A. Sattar, S/o. Late Khan Saheb Abdul Gani.
3. Smt. Mumtaz Begum D/o. Late Khan Saheb Abdul Gani Both are R/o. 72/1, St.Marks Road, Bangalore-01.
4. A. Gaffar, S/o. Late Khan Saheb Abdul Gani
5. Suhail Syed, S/o. Late Khan Saheb Abdul Gani Both are R/o. No.87, M.G.Road, Bangalore-01.

V/s.

**Respondent:** - NIL -

**PUBLIC NOTICE**

Notice is hereby given that a petition has been made to this court U/s. 372 of the Indian Succession Act for grant of Succession Certificate in respect of the debts and securities of the deceased Shahjehan who died at Bangalore on 27.12.1998 at Bangalore.

Be it known that, no caveat has been entered and the petition is posted for hearing on **04.01.2007.** All persons claiming to have any interest, with assets of the deceased may come and participate in the proceedings before grant of Succession Certificate.

Given under my hand and seal of this court dated: 19th day of December 2006.

By order of the court,
Deputy Registrar,
City Civil Court, Mayohall Unit, Bangalore.

**IN THE COURT OF THE IV ADDL CITY CIVIL JUDGE, MAYOHALL, BANGALORE**
**P.& S.C. 15054/2006**

**Petitioners:** V/s **Respondent:**

Smt. Rosamma George W/o George Sebastian - NIL -
Aged about 59 years, R/o No.32/5, DAD Quarters,
Someshwarapura Extension, Ulsoor, Bangalore-08.

**PUBLIC NOTICE**

Notice is hereby given that a petition has been filed U/s. 276 & 278 of the Indian Succession Act for grant of probate, in respect of will of the deceased M. Rajashekar who died on 09.10.1992 at Bangalore.

Be it known that, no caveat has been entered and the petition is posted for hearing on **11.01.2007.** All persons claiming to have any interest may come and participate in the proceedings before grant of probate in respect of schedule property i.e., B, type house bearing no.315/D at Domlur III Phase, Bangalore.

Given under my hand and seal of this court dated: 22nd day of December 2006.

By order of the court,
Assistant Registrar,
City Civil Court, Mayohall Unit, Bangalore.

P.D.113

## ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಮಂಡ್ಯ ವಿಭಾಗ, ಮಂಡ್ಯ

## "ಮುಟ್ಟುಗೋಲು ವಾಹನಗಳ ಟೆಂಡರ್ ಕಂ ಹರಾಜು ಪ್ರಕಟಣೆ"

**ಸಂಖ್ಯೆ: ಎಸ್‌ಎಎಸ್/ಅಅ/ವಾ.ಹ/2006-07, ದಿನಾಂಕ: 13ನೇ ಡಿಸೆಂಬರ್ 2006**

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಮಂಡ್ಯ ವಿಭಾಗದಲ್ಲಿ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿದ್ದ ವಾಹನಗಳನ್ನು ವಿಚಾರಣೆ ನಡೆಸಿ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ಈ ಕೆಳಕಂಡ ವಾಹನಗಳನ್ನು ಟೆಂಡರ್-ಕಂ-ಹರಾಜು ಮೂಲಕ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಮಂಡ್ಯ ಅವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಿಂದ ವಾಹನಗಳು ಯಾವ ಸ್ಥಿತಿಯಲ್ಲಿವೆಯೋ ಹಾಗೆಯೇ ಬಹಿರಂಗ ಹರಾಜು ಮಾಡಲಾಗುವುದು. ಇಚ್ಛೆಯುಳ್ಳವರು ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸಿ ಪಡೆಯಬಹುದಾಗಿರುತ್ತದೆ.

| ಕ್ರ. ಸಂ. | ವಾಹನದ ವಿವರ | ವಾಹನದ ಸಂಖ್ಯೆ | ವಾಹನವಿರುವ ಸ್ಥಳ ಮತ್ತು ಹರಾಜು ಸ್ಥಳ | ಹರಾಜು ದಿನಾಂಕ ಮತ್ತು ವೇಳೆ |
|---|---|---|---|---|
| 1 | ಆಟೋರಿಕ್ಷಾ | ಸಿಎಂಒ-9208 | ವಲಯ ಅರಣ್ಯಾಧಿಕಾರಿ, ಮಂಡ್ಯ ವಲಯ, ಮಂಡ್ಯ ರವರ ಕಛೇರಿ ಆವರಣ | 20.01.2007 ಸಾ. 4.00 |

**ನಿಬಂಧನೆಗಳು:**

1. ಟೆಂಡರ್ ಫಾರಂಗಳನ್ನು ಈ ಕಛೇರಿಯಲ್ಲಿ ಹರಾಜಿನ ದಿನಾಂಕದಂದು 12 ಗಂಟೆಯವರೆಗೆ ಪ್ರತಿಯೊಂದು ಫಾರಂಗೆ ರೂ.250/- ಮತ್ತು ಅದಕ್ಕೆ ತಗಲುವ ಪ್ರಚಲಿತ ತೆರಿಗೆಗಳನ್ನು ಪಾವತಿಸಿ ಪಡೆಯಬಹುದು. ಸದರಿ ಫಾರಂನ್ನು ಅದೇ ದಿವಸ ಮಧ್ಯಾಹ್ನ 3.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ನಂತರ ಹರಾಜು ನಡೆಸಲಾಗುವುದು.
2. ಹರಾಜಿನಲ್ಲಿ ಭಾಗವಹಿಸುವವರು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಮಂಡ್ಯ ರವರ ಪರವಾಗಿ ರೂ.2000/- ಮುಂಗಡ ಠೇವಣಿಯನ್ನು ಡಿ.ಡಿ. ಅಥವಾ ನಗದು ರೂಪದಲ್ಲಿ ಪಾವತಿಸಿ ರಶೀದಿ ಪಡೆಯಬೇಕು.
3. ಹರಾಜಿಗೆ ಇಡಲಾಗಿರುವ ವಾಹನಗಳನ್ನು ಕಛೇರಿ ವೇಳೆಯಲ್ಲಿ ಹರಾಜಿಗಿಂತ ಮುಂಚಿತವಾಗಿ ವೀಕ್ಷಿಸಬಹುದು.
4. ಟೆಂಡರ್-ಕಂ-ಹರಾಜು ಇವೆರಡರಲ್ಲಿ ಯಾವುದು ಹೆಚ್ಚಿದೆಯೋ ಅದನ್ನು ಗಣನೆಗೆ ತೆಗೆದುಕೊಳ್ಳಲಾಗುವುದು.
5. ವಾಹನವನ್ನು ಹರಾಜಿನಲ್ಲಿ ಪಡೆದವರು ವಾಹನದ ಮಾಲೀಕತ್ವ ವರ್ಗಾವಣೆ ಹಾಗೂ ದಾಖಲೆಗಳನ್ನು ಅವರ ಸ್ವಂತ ಖರ್ಚಿನಲ್ಲಿ ಹಾಗೂ ಸ್ವಂತ ಜವಾಬ್ದಾರಿಯ ಮೇಲೆ ಮಾಡಿಸಿಕೊಳ್ಳತಕ್ಕದ್ದು.
6. ಯಶಸ್ವಿ ಬಿಡ್ಡುದಾರರು ವಾಹನ ಖರೀದಿ ಮೊತ್ತದ ಶೇ.50 ರಷ್ಟು ಹಣ ಮತ್ತು ಖರೀದಿಸಿದ ಪೂರ್ಣ ಮೊತ್ತಕ್ಕೆ ಮಾರಾಟ ತೆರಿಗೆ ಶೇ.8 ಮತ್ತು ಇತರೆ ತೆರಿಗೆಗಳನ್ನು ಹರಾಜಿನ ದಿವಸವೇ ಪಾವತಿಸಬೇಕು. ಉಳಿಕೆ ಶೇ.50 ರಷ್ಟು ಮೊತ್ತವನ್ನು ಹರಾಜು ಸ್ಥಿರೀಕರಣ ಆದೇಶ ತಲುಪಿದ ಏಳು (7) ದಿವಸದೊಳಗಾಗಿ ಪಾವತಿಸಿ ಖರೀದಿಸಿರುವ ವಾಹನವನ್ನು ವಶಕ್ಕೆ ಪಡೆಯಬೇಕು.
7. ಇತರೆ ಹೆಚ್ಚಿನ ಮಾಹಿತಿಗಾಗಿ ಈ ಕಛೇರಿಯನ್ನು ಕಛೇರಿ ವೇಳೆಯಲ್ಲಿ ಪಡೆಯಬೇಕು.

**ಕೆ.ಎಂ. ನಾರಾಯಣ ಸ್ವಾಮಿ ಭಾ.ಅ.ಸೇ.**
ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯ.

ಪಿ.ಆರ್. 804

## ಔಷಧ ನಿಯಂತ್ರಣ ಇಲಾಖೆ

## ಪ್ರಾಚಾರ್ಯರ ಕಛೇರಿ, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ನಂ.2 ಪಿ. ಕಾಳಿಂಗ ರಾವ್ ರಸ್ತೆ, ಬೆಂಗಳೂರು 27

## ಟೆಂಡರ್ ಪ್ರಕಟಣೆ

**ಸಂಖ್ಯೆ: ಔನಿಇ:ಸಔವಿಮವಿ:ಟಿಪಿಎ:04:2006, ದಿನಾಂಕ: 20ನೇ ಡಿಸೆಂಬರ್ 2006**

ಸದಸ್ಯ ಕಾರ್ಯದರ್ಶಿಗಳು, ಟೆಂಡರುಗಳನ್ನು ಆಹ್ವಾನಿಸುವ ಮತ್ತು ಅಂಗೀಕರಿಸುವ ಪ್ರಾಧಿಕಾರ, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು ಇವರು ಫ್ಲಾಶ್ ಕ್ರೊಮೆಟೋಗ್ರೋಫಿ ಸಿಸ್ಟಂಮ್ ಮತ್ತು ಸ್ಟೆಬಿಲಿಟಿ ಚೇಂಬರ್ ಇನ್ಸುಟ್ರುಮೆಂಟ್‌ಗಳನ್ನು ಖರೀದಿಗಾಗಿ ಮೊಹರಾದ ಟೆಂಡರುಗಳನ್ನು ಆಹ್ವಾನಿಸಿರುತ್ತಾರೆ.

ಖಾಲಿ ಟೆಂಡರ್ ನಮೂನೆಗಳು ಈ ವಿದ್ಯಾಲಯದ ಕಛೇರಿಯಲ್ಲಿ ದಿನಾಂಕ: 23.01.2007 ರಿಂದ 29.01.07 ರವರೆಗೆ ಎಲ್ಲಾ ಕೆಲಸದ ದಿನಗಳಲ್ಲಿ ಬೆಳಿಗ್ಗೆ 11 ರಿಂದ 4 ಗಂಟೆಯವರೆಗೆ ರೂ. 60 + ತೆರಿಗೆಗಳನ್ನು ನಗದಾಗಿ ಪಾವತಿಸಿದ್ದಲ್ಲಿ ಟೆಂಡರ್ ನಮೂನೆ ಮಾರಾಟ ಮಾಡಲಾಗುತ್ತದೆ. ಭರ್ತಿಗೊಳಿಸಿದ ಟೆಂಡರ್ ದಾಖಲಾತಿಗಳನ್ನು ಫ್ಲಾಶ್ ಕ್ರೊಮೆಟೋಗ್ರೋಫಿ ಭದ್ರತಾ ಠೇವಣಿ ರೂ.3500/- ಮತ್ತು ಸ್ಟೆಬಿಲಿಟಿ ಚೇಂಬರ್ ಇನ್ಸುಟ್ರುಮೆಂಟ್‌ಗಳಿಗೆ ಭದ್ರತಾ ಠೇವಣಿ ರೂ.1500/- ರೊಂದಿಗೆ ಮೊಹರಾದ ಲಕೋಟೆಗಳಲ್ಲಿ ದಿನಾಂಕ: 31.01.2007ರ ಸಂಜೆ 4 ಗಂಟೆಯೊಳಗೆ ಸ್ವೀಕರಿಸಲಾಗುತ್ತದೆ. ಟೆಂಡರುಗಳನ್ನು ದಿನಾಂಕ: 01.02.2007 ರಂದು ಅಧ್ಯಕ್ಷರು, ಆಹ್ವಾನಿಸುವ ಮತ್ತು ಅಂಗೀಕರಿಸುವ ಪ್ರಾಧಿಕಾರ, ಮತ್ತು

ಪ್ರಾಚಾರ್ಯರು, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು ಇವರ ಸಮಕ್ಷಮದಲ್ಲಿ ತೆರೆಯಲಾಗುತ್ತದೆ. ಒಂದು ವೇಳೆ ದಿನಾಂಕ: 01.02.2007 ರಂದು ಸಾರ್ವಜನಿಕ ರಜೆ ಎಂದು ಘೋಷಿಸಿದ್ದಲ್ಲಿ ಟೆಂಡರುಗಳನ್ನು ಮಾರನೆಯ ಕೆಲಸದ ದಿನ ಟೆಂಡರ್‌ಗಳನ್ನು ತೆರೆಯಲಾಗುತ್ತದೆ.

ಸದಸ್ಯ ಕಾರ್ಯದರ್ಶಿಗಳು,
ಟೆಂಡರುಗಳನ್ನು ಆಹ್ವಾನಿಸುವ ಮತ್ತು ಅಂಗೀಕರಿಸುವ ಪ್ರಾಧಿಕಾರ,
ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು-27.

ಪಿ.ಆರ್. 809

## ಆರ್ಥಿಕ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಆಇ 107 ಆಖಇ 2006, ದಿನಾಂಕ: 8ನೇ ಡಿಸೆಂಬರ್ 2006**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಖಜಾನೆ ಇಲಾಖೆಯ ಗ್ರೂಪ್-ಎ ವೃಂದದ ಖಜಾನಾಧಿಕಾರಿ ಹುದ್ದೆಗೆ ಅಭ್ಯರ್ಥಿಯನ್ನು ಆಯ್ಕೆಮಾಡಿ, ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ E(1)41/2005-06/PSC, Bangalore, ದಿನಾಂಕ: 04.05.2006 ರಲ್ಲಿ ಪ್ರಕಟಿಸಿದ್ದು, ಅದನ್ನು ದಿನಾಂಕ: 05.05.06ರ ರಾಜ್ಯಪತ್ರದಲ್ಲಿ ಪ್ರಕಟಿಸಿದೆ. ಈ ಆಯ್ಕೆ ಪಟ್ಟಿಯನ್ವಯ ಈ ಕೆಳಕಂಡ ಅಭ್ಯರ್ಥಿಯನ್ನು ಖಜಾನೆ ಇಲಾಖೆಯಲ್ಲಿ ರೂ.7400-200-8800-260-10880-320-13120 ರ ವೇತನ ಶ್ರೇಣಿಯ ಖಜಾನಾಧಿಕಾರಿ ಹುದ್ದೆಗೆ ಪರಿವೀಕ್ಷಣೆ ಮೇಲೆ (On Probation) ಈ ಮೂಲಕ ನೇಮಕ ಮಾಡಲಾಗಿದೆ.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ **ಶ್ರೀ/ಶ್ರೀಮತಿ** |
|---|---|
| 01 | ರಾಜಣ್ಣ ಎಂ.ಆರ್.,<br>ಎಂ.ಡಿ.ಕೋಟೆ ಪೋಸ್ಟ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ-577532 |

ಈ ನೇಮಕಾತಿಯು ಅಭ್ಯರ್ಥಿಯ ಆಯ್ಕೆ ಪಟ್ಟಿಗೆ ಸಂಬಂಧಿಸಿದಂತೆ ಸದರಿ ನೇಮಕಾತಿಯು 2004-05ರ ಆಯ್ಕೆ ಪ್ರಕ್ರಿಯೆಗೆ ಸಂಬಂಧಿಸಿದಂತೆ, ಸರ್ವೋಚ್ಚ ನ್ಯಾಯಾಲಯ, ರಾಜ್ಯ ಉಚ್ಚನ್ಯಾಯಾಲಯ ಮತ್ತು ಕರ್ನಾಟಕ ಆಡಳಿತ ನ್ಯಾಯ ಮಂಡಳಿಗಳಲ್ಲಿ ಬಾಕಿ ಇರುವ ವಿವಿಧ ಅರ್ಜಿಗಳಲ್ಲಿ ನ್ಯಾಯಾಲಯಗಳು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ.

ಈ ಅಭ್ಯರ್ಥಿಯು ಎರಡು ವರ್ಷಗಳ ಅವಧಿಯಲ್ಲಿ ಪರೀಕ್ಷಾರ್ಥ ತರಬೇತಿಯಲ್ಲಿರುತ್ತಾರೆ. ಈ ಅವಧಿಯಲ್ಲಿ 1974ರ ಕರ್ನಾಟಕ ಸಿವಿಲ್ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಕನ್ನಡ ಭಾಷಾ ಪರೀಕ್ಷೆ ಹಾಗೂ ಈ ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು ಮತ್ತು ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸಬೇಕು.

ಈ ಅಭ್ಯರ್ಥಿಯ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮ/ಆದೇಶದ ಅಧೀನಕ್ಕೆ ಒಳಪಟ್ಟಿರುತ್ತವೆ.

ಈ ಅಭ್ಯರ್ಥಿಯು, ಈ ಅಧಿಸೂಚನೆಯನ್ನು ನೋಂದಾಯಿತ ಅಂಚೆ ಮೂಲಕ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ನಿರ್ದೇಶಕರು, ಖಜಾನೆ ಇಲಾಖೆ, ವಿ.ವಿ.ಗೋಪುರ, ಬೆಂಗಳೂರು-560001, ಇವರಲ್ಲಿ ಕರ್ತವ್ಯದ ಮೇಲೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಶ್ರೀನಿವಾಸ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ).

ಪಿ.ಆರ್. 808

## ಕರ್ನಾಟಕ ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಚಿತ್ರದುರ್ಗ

## ಟೆಂಡರ್ ಪ್ರಕಟಣೆ

**(ದ್ವಿ-ಲಕೋಟೆ ಪದ್ಧತಿ) (ಎರಡನೇ ಕರೆ) ಟೆಂಡರ್ ಸಂಖ್ಯೆ: 03/2006-07, ದಿನಾಂಕ: 30ನೇ ನವೆಂಬರ್ 2006**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಒಂದನೇ ದರ್ಜೆ ನೋಂದಾಯಿತ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗೆ ಐಟಂವಾರು ಟೆಂಡರ್‌ನ್ನು **ದ್ವಿ-ಲಕೋಟೆ ಪದ್ಧತಿಯಲ್ಲಿ, ಟರ್ನ್ ಕೀ ಆಧಾರದ ಮೇಲೆ** ದ್ವಿಪ್ರತಿಗಳಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-1999, 2000 ಮತ್ತು ಆಕ್ಟ್-2000ರ ಪ್ರಕಾರ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ.

1 ಗುತ್ತಿಗೆದಾರರು ತಾಂತ್ರಿಕ ಬಿಡ್‌ನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ, ಲಕೋಟೆಯಲ್ಲಿ ಮೊಹರು ಮಾಡಿ, ಲಕೋಟೆಯ ಮೇಲೆ ತಾಂತ್ರಿಕ ಬಿಡ್ ಎಂದು ನಮೂದಿಸಿ, ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

2. ಗುತ್ತಿಗೆದಾರರು ಆರ್ಥಿಕ ಬಿಡ್ಡನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಷೆಡ್ಯೂಲ್-ಬಿ ನಲ್ಲಿ ದರಗಳನ್ನು ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ಆರ್ಥಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

ಮೇಲ್ಕಂಡ ತಾಂತ್ರಿಕ ಬಿಡ್ ಲಕೋಟೆ ಮತ್ತು ಆರ್ಥಿಕ ಬಿಡ್ ಲಕೋಟೆ ಎರಡನ್ನೂ ಇನ್ನೊಂದು ಲಕೋಟೆಯಲ್ಲಿ ಹಾಕಿ ಕಾಮಗಾರಿಯ ಹೆಸರು ಹಾಗೂ ಗುತ್ತಿಗೆದಾರರ ಪೂರ್ಣ ವಿಳಾಸ ನಮೂದಿಸಿ, ಮೊಹರು ಮಾಡಿರುವ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರ ಕಾರ್ಯಾಲಯದಲ್ಲಿ, ಈ ಕೆಳಗೆ ಸೂಚಿಸಿರುವ ದಿನಾಂಕದಂದು ಸಾಯಂಕಾಲ 4.00 ಗಂಟೆವರೆಗೆ ಸ್ವೀಕರಿಸಲಾಗುವುದು. ಟೆಂಡರ್‌ಗಳನ್ನು ಈ ಕೆಳಗೆ ಸಹಿ

ಮಾಡಿದವರಿಂದ ನಮೂದಿಸಿರುವ ದಿನಾಂಕದಂದು ಅಥವಾ ಇತರೆ ಅನುಕೂಲಕರವಾದ ದಿನಾಂಕದಂದು ಟೆಂಡರ್‌ದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಗೆ ನಮೂದಿಸಿರುವ ದಿನಾಂಕಗಳು ಸಾರ್ವಜನಿಕ ರಜಾ ದಿನವಾದರೆ ಮಾರನೆಯ ಕೆಲಸದ ದಿನವೇ ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು.

ತಾಂತ್ರಿಕ ಬಿಡ್‌ನ್ನು ಮೊದಲು ತೆರೆಯಲಾಗುವುದು. ಗುತ್ತಿಗೆದಾರರು ಇದರಲ್ಲಿ ಒದಗಿಸಲಾದ ವಿವರಗಳನ್ನು ಪರಿಶೀಲಿಸಲಾಗುವುದು. ತೃಪ್ತಿಕರವಾದ ವಿವರಗಳನ್ನು ಸಲ್ಲಿಸಿದ ಗುತ್ತಿಗೆದಾರರ ತಾಂತ್ರಿಕ ಬಿಡ್‌ಗಳನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯಾದ ನಂತರ ಅರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ತೆರೆಯಲಾಗುವುದು. ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕವನ್ನು ಅರ್ಹ ಗುತ್ತಿಗೆದಾರರಿಗೆ ತಿಳಿಸಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅನರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್ ತೆರೆಯಲಾಗುವುದಿಲ್ಲ. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

1) ಟೆಂಡರ್ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 16.01.2007ರ ಸಂಜೆ 5.00 ಗಂಟೆಯವರೆಗೆ
2) ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: 20.01.2007ರ ಸಂಜೆ 5.00 ಗಂಟೆಯವರೆಗೆ
3) ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ದಿನಾಂಕ: 25.01.2007ರ ಸಂಜೆ 4.00 ಗಂಟೆಯೊಳಗೆ
(ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಒಳಗೊಂಡಂತೆ)

| ಪ್ಯಾಕೇಜ್ ಸಂಖ್ಯೆ | ಕಾಮಗಾರಿಯ ಹೆಸರು | ಟೆಂಡರ್‌ಗಿಟ್ಟ ಅಂದಾಜು ಮೊತ್ತ | ಇ.ಎಂ.ಡಿ. | ಖಾಲಿ ಟೆಂಡರ್ ಫಾರಂ ಬೆಲೆ (ಹಿಂದಿರುಗಿಸ ಲಾರದಂಥದ್ದು) | ಕಾಲಮಿತಿ (ಮಳೆಗಾಲ ಸೇರಿ) |
|---|---|---|---|---|---|
| 1 | ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲ್ಲೂಕು ದೇವರ ಹೊನ್ನಾಳಿ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ (ಸಿವಿಲ್ ಹಾಗೂ ಮೆಷಿನರಿ ಕಾಮಗಾರಿ) | ರೂ.173.50 ಲಕ್ಷಗಳು | ರೂ.1,73,500 | ರೂ.20,000.00 ಮತ್ತು ತೆರಿಗೆ | 12 ತಿಂಗಳು |

**ಷರತ್ತುಗಳು:**

1) ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಳನ್ನು ಪಡೆಯುವ ಸಲುವಾಗಿ ಅರ್ಜಿ ಸಲ್ಲಿಸುವಾಗ ಈ ಕೆಳಗೆ ತೋರಿಸಿದ ಮೂಲ ಪ್ರಮಾಣ ಪತ್ರಗಳನ್ನು ತೋರಿಸಿ ಪರಿಶೀಲಿಸಿಕೊಂಡು ಅರ್ಜಿಯೊಂದಿಗೆ ನಕಲು ಪ್ರತಿಗಳನ್ನು ಲಗತ್ತಿಸುವುದು.
   1. ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೋಂದಣಿ ಪ್ರಮಾಣ ಪತ್ರ.
   2. ಇತ್ತೀಚಿನ ಕರ್ನಾಟಕ ರಾಜ್ಯ ಮಾರಾಟ ತೆರಿಗೆ ತೆರಿಗೆಯ ಕ್ಲಿಯರೆನ್ಸ್ ಪ್ರಮಾಣ ಪತ್ರ
   3. ಅರ್ಹತಾ ಷರತ್ತಿನ ಸಂಖ್ಯೆ: 2 ಮತ್ತು 3 ರಲ್ಲಿ ತಿಳಿಸಿರುವಂತೆ ಟೆಂಡರ್ ಪಡೆಯಲು ಅರ್ಹತೆಗಳನ್ನು ಹೊಂದಿರಬೇಕು.

**2) ಖಾಲಿ ಟೆಂಡರ್ ಫಾರಂಗಳಿಗೆ ಹಣ ಸಂದಾಯ ಮಾಡುವ ವಿಧಾನ:**

ನಗದು / ಡಿ.ಡಿ. ಅಥವಾ ಬ್ಯಾಂಕಿನ ಚೆಕ್ಕನ್ನು ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು.

**3) ಇ.ಎಂ.ಡಿ. ಸಲ್ಲಿಸುವ ವಿಧಾನ:**

ನಿಗದಿತ ಇ.ಎಂ.ಡಿ.ಯನ್ನು ಕಡ್ಡಾಯವಾಗಿ ರಾಷ್ಟ್ರೀಕೃತ ಬ್ಯಾಂಕಿನ ಡಿ.ಡಿ/ಪೇ ಆರ್ಡರ್/ಎಫ್‌ಡಿಆರ್ ರೂಪದಲ್ಲಿ ಸಲ್ಲಿಸಬಹುದು. ಎನ್.ಎಸ್.ಸಿ.ಗಳನ್ನು ಸಲ್ಲಿಸಿದ್ದೇ ಆದಲ್ಲಿ ಗುತ್ತಿಗೆದಾರರು ಎನ್.ಎಸ್.ಸಿ.ಗಳನ್ನು ಕಾರ್ಯಪಾಲಕ ಇಂಜಿನಿಯರ್‌ರವರ ಹೆಸರಿನಲ್ಲಿ ಒತ್ತೆ ಇಟ್ಟಿರಬೇಕು ಹಾಗೂ ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಬ್ಯಾಂಕಿನ ಡಿಡಿ/ಪೇ ಆರ್ಡರ್/ಎಫ್‌ಡಿಆರ್ ರೂಪದಲ್ಲಿ ಸಲ್ಲಿಸಿದ್ದರೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು, ಟೆಕ್ನಿಕಲ್ ಬಿಡ್‌ನ ಲಕೋಟೆಯಲ್ಲಿ ಲಗತ್ತಿಸಿರಬೇಕು. ಯಾವುದೇ ಕಾರಣಕ್ಕೂ ಬ್ಯಾಂಕ್ ಗ್ಯಾರಂಟಿ ಪರಿಗಣಿಸುವುದಿಲ್ಲ. ಇ.ಎಂ.ಡಿ.ಯನ್ನು ಟೆಂಡರ್ ಸ್ವೀಕರಿಸಿದ ದಿನಾಂಕದಿಂದ 180 ದಿನಗಳ ಅವಧಿಗೆ ಮಾನ್ಯ ಹೊಂದಿರಬೇಕು.

4) ತಾಂತ್ರಿಕ (ಟೆಕ್ನಿಕಲ್) ಬಿಡ್ ಲಕೋಟೆಯಲ್ಲಿ ಒದಗಿಸಬೇಕಾದ ವಿವರಗಳು
   1. ಇ.ಎಂ.ಡಿ.
   2. ಅರ್ಹತಾ ಷರತ್ತಿನ ಸಂಖ್ಯೆ 2 ಮತ್ತು 3 ರಲ್ಲಿ ತಿಳಿಸಿರುವಂತೆ ಟೆಂಡರ್ ಪಡೆಯಲು ಅರ್ಹತೆಗಳ ವಿವರಗಳು.

**5) ಆರ್ಥಿಕ ಬಿಡ್ ಲಕೋಟೆಯಲ್ಲಿ ಒದಗಿಸಬೇಕಾದ ವಿವರಗಳು:**
   1. ಷೆಡ್ಯೂಲ್-ಬಿ ಯನ್ನು ದ್ವಿಪ್ರತಿಯಲ್ಲಿ ಅಂಕಿ ಮತ್ತು ಅಕ್ಷರಗಳಲ್ಲಿ ದರಗಳನ್ನು ಹಾಗೂ ಮೊತ್ತವನ್ನು ನಮೂದಿಸಿ ತಿದ್ದುಪಡಿ ಮಾಡಿರುವುದನ್ನು ಸಹಿಯೊಂದಿಗೆ ದೃಢೀಕರಿಸಬೇಕು.
   2. ಟೆಂಡರ್ ಡಾಕ್ಯೂಮೆಂಟ್‌ನಲ್ಲಿ ಎಲ್ಲಾ ವಿವರಗಳನ್ನು ಪೂರ್ಣ ರೀತಿಯಲ್ಲಿ ಭರ್ತಿ ಮಾಡಿ ಪ್ರತಿ ಪುಟದಲ್ಲಿ ಗುತ್ತಿಗೆದಾರರು ಸಹಿ ಮಾಡಬೇಕು.

ಗುತ್ತಿಗೆದಾರರು ಅರ್ಜಿಯೊಂದಿಗೆ ಟೆಂಡರ್ ಫಾರಂ ಶುಲ್ಕವನ್ನು (ಹಿಂದಿರುಗಿಸಲಾರದಂಥದ್ದು) ಗುತ್ತಿಗೆ ನೋಂದಣಿ ಪ್ರತಿ, ಸೇಲ್ಸ್ ಟ್ಯಾಕ್ಸ್, ವ್ಯಾಟ್ ರಿಜಿಸ್ಟ್ರೇಷನ್ ಪ್ರಮಾಣ ಪತ್ರದ ಪ್ರತಿಗಳೊಂದಿಗೆ ಕಾರ್ಯಪಾಲಕ ಇಂಜಿನಿಯರ್ ಸಣ್ಣ ನೀರಾವರಿ ವಿಭಾಗ, ಚಿತ್ರದುರ್ಗ ಇವರಿಗೆ ಸಲ್ಲಿಸುವುದು.

1. ಖಾಲಿ ಟೆಂಡರ್ ಫಾರಂಗಳಿಗೆ ಅರ್ಜಿ ಸಲ್ಲಿಸುವ ಗುತ್ತಿಗೆದಾರರು ಈ ಕೆಳಕಂಡ ಅರ್ಹತೆ ಹೊಂದಿರಬೇಕು.
   1) ಕನಿಷ್ಟ ಎರಡು ಆರ್ಥಿಕ ವರ್ಷಗಳಲ್ಲಿ ರೂ.347.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ (ಎಲ್ಲಾ ತರಹದ ಸಿವಿಲ್ ಕಾಮಗಾರಿಗಳ ನಿರ್ಮಾಣ) ವಾರ್ಷಿಕ ವಹಿವಾಟು ಮಾಡಿರಬೇಕು.
   2) ಪ್ರಮುಖ ಗುತ್ತಿಗೆದಾರನಾಗಿ ಇದೇ ತರಹನಾದ ರೂ.140.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಕನಿಷ್ಟ ಒಂದು ಕಾಮಗಾರಿಯನ್ನು ತೃಪ್ತಿಕರವಾಗಿ ಮುಗಿಸಿರಬೇಕು.

3) ಯಾವುದೇ ಒಂದು ವರ್ಷದಲ್ಲಿ ಈ ಕೆಳಗೆ ಕಾಣಿಸಿದ ಕನಿಷ್ಟ ಪರಿಮಾಣದ ಕೆಲಸವನ್ನು ಮಾಡಿರಬೇಕು.

| | | | |
|---|---|---|---|
| 1. | ಅಗೆತದ ಕೆಲಸ | : | 10000 ಘ.ಮೀ. |
| 2. | ಸರಳು ಸಹಿತ ಮತ್ತು ಸರಳು ರಹಿತ ಕಾಂಕ್ರೀಟ್ ಕೆಲಸ | : | 1000 ಘ.ಮೀ. |
| 4. | ರೈಸಿಂಗ್ ಮೈನ್ ಕಾಮಗಾರಿ ಪಿ.ಎಸ್.ಸಿ. ಪೈಪು ಒಳಗೊಂಡಂತೆ | : | 1000 ಮೀ. |
| 5. | ಡೀಪ್ ವೆಲ್ ಟರ್ಬೈನ್ ಪಂಪು ಪೂರೈಕೆ ಹಾಗೂ ಅಳವಡಿಸುವುದು ಮೋಟಾರ್ ಸಹಿತ | : | 200 ಹೆಚ್.ಪಿ. |

ಮೇಲಿನ ಪೂರಕ ದಾಖಲೆಗಳ ಬಗ್ಗೆ ಕಾರ್ಯನಿರ್ವಾಹಕ ಇಂಜಿನಿಯರ್ ಗಿಂತ ಕಡಿಮೆ ದರ್ಜೆ ಇಲ್ಲದ ಅಧಿಕಾರಿಯಿಂದ ದೃಢೀಕರಣದ ಪ್ರತಿ ಲಗತ್ತಿಸುವುದು.

6) ಅರ್ಜಿದಾರರು ಪ್ರದರ್ಶಿಸುವುದು.

ಅ) ಮುಖ್ಯವಾಗಿ ಹಾಗೂ ಮಹತ್ವವಾಗಿರುವ ಈ ಕೆಳಕಂಡ ಯಂತ್ರೋಪಕರಣಗಳನ್ನು ಹೊಂದಿರಬೇಕು (ಸ್ವಂತ ಅಥವಾ ಲೀಸ್ ಮೇಲೆ), ಲೀಸ್ ಆಗಿದ್ದಲ್ಲಿ ಜಿ.ಪಿ.ಎ. ಹಾಗೂ ಮೂಲ ದಾಖಲಾತಿ ಒದಗಿಸುವುದು.

| | | | |
|---|---|---|---|
| 1. | ಎಕ್ಸ್‌ವೇಟರ್/ಪೋಕ್ಲೇನ್ (0.90 ಘ.ಮೀ. ಸಾಮರ್ಥ್ಯ) | : | 1 ನಂ. |
| 2. | ಲಾರಿಗಳು / ಟಿಪ್ಪರ್‌ಗಳು | : | 2 ನಂ. |
| 3. | ಕಂಪ್ರೆಸ್ಸರ್ / ವ್ಯಾಗನ್ ಡ್ರಿಲರ್ | : | 2 ನಂ. |
| 4. | ಕಾಂಕ್ರೀಟ್ ಮೆಷೀನ್ ಮಿಕ್ಸರ್ (10/7 ಘ.ಫೀಟ್ ಸಾಮರ್ಥ್ಯ) | : | 2 ನಂ |
| 5. | ಪಿನ್ ವೈಬ್ರೇಟರ್ | : | 2 ನಂ. |
| 6. | ಪಂಪ್ ಸೆಟ್ (5 ಹೆಚ್.ಪಿ.) | : | 2 ನಂ |

ಆ) 5 ವರ್ಷಗಳ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಯ ಇಂತಹದೆ ಯೋಜನೆ ನಿರ್ಮಾಣದ ಅನುಭವವುಳ್ಳ ಒಬ್ಬ ಪ್ರಾಜೆಕ್ಟ್ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ತಾಂತ್ರಿಕ ಪರಿಣಿತರನ್ನು ಹೊಂದಿರಬೇಕು.

ಇ) ಈ ಯೋಜನೆಗೆ ಬೇಕಾದ ಸಂಪನ್ಮೂಲ ಚರಾಸ್ಥಿ ಮತ್ತು / ಅಥವಾ ಬ್ಯಾಂಕ್ ಕ್ರೆಡಿಟ್ ರೂಪದಲ್ಲಿ ಕನಿಷ್ಟ ರೂ.52.00 ಲಕ್ಷಗಳ ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ (ಕ್ರೆಡಿಟ್ ಲೈನ್ಸ್ / ಅನುದಾನ ಪ್ರಮಾಣ ಪತ್ರ ಬ್ಯಾಂಕಿನಿಂದ ಪ್ರಮಾಣೀಕರಿಸಿದ್ದು)

7. ಕಾಮಗಾರಿಗೆ ಅವಶ್ಯವಿರುವ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಮತ್ತು ಇಲಾಖಾವತಿಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ. ಗುತ್ತಿಗೆದಾರರು ಐ.ಎಸ್. ಸ್ಟಾಂಡರ್ಡ್ ಸಾಮಗ್ರಿಗಳನ್ನು ಖರೀದಿಸಬೇಕು. ಸಾಮಗ್ರಿಗಳ ಗುಣಮಟ್ಟವನ್ನು ಸಕ್ಷಮ ಗುಣ ನಿಯಂತ್ರಣ ಪ್ರಾಧಿಕಾರದಿಂದ ಪರೀಕ್ಷೆ ಮಾಡಿಸಿ ಗುಣ ಮಟ್ಟದ ಬಗ್ಗೆ ಪ್ರಮಾಣ ಪತ್ರ ಒದಗಿಸತಕ್ಕದ್ದು.

8. ಖಾಲಿ ಟೆಂಡರ್ ಫಾರಂ ವಿತರಿಸುವಾಗ ಗುತ್ತಿಗೆದಾರರ ನೋಂದಣಿ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸತಕ್ಕದ್ದು.

9. ಸತತವಾಗಿ 3 ಬಾರಿ ಟೆಂಡರ್ ಫಾರಂ ಖರೀದಿಸಿ ಟೆಂಡರ್ ಹಾಕದೇ ಇರುವ ಗುತ್ತಿಗೆದಾರರು ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.

10. ಗುತ್ತಿಗೆದಾರರು ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳನ್ನು ನೋಟರಿ ಅಥವಾ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಿ ದಾಖಲಾತಿ ಪ್ರತಿಗಳನ್ನು ಟೆಂಡರ್‌ನೊಂದಿಗೆ ಲಗತ್ತಿಸತಕ್ಕದ್ದು. ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳ ಮೂಲ ಪ್ರತಿಗಳನ್ನು ಗುತ್ತಿಗೆದಾರರು ಟೆಂಡರ್ ತೆರೆಯುವ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

11. ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಪರಿಗಣಿಸುವುದಿಲ್ಲ.

12. ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯಪಾಲಕ ಇಂಜಿನಿಯರರು, ಸಣ್ಣ ನೀರಾವರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯ ಸೂಚನಾ ಫಲಕದಲ್ಲಿ ಪ್ರಕಟಿಸಲಾಗುವುದು / ತಿಳಿಸಲಾಗುವುದು.

13. ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಇಲಾಖೆಗೆ ಸಂಬಂಧಿಸಿದ ಅಧಿಕಾರಿಗಳು ಕಾಯ್ದಿರಿಸಿಕೊಂಡಿರುತ್ತಾರೆ.

14. ತಾಂತ್ರಿಕ ಬಿಡ್‌ನಲ್ಲಿ ವಿವರಗಳು ನಮೂದಿಸಲು ಸ್ಥಳಾವಕಾಶ ಕಡಿಮೆಯಾದಲ್ಲಿ ಹೆಚ್ಚುವರಿ ಪುಟಗಳನ್ನು ಬಳಸಬಹುದಾಗಿದೆ.

ಹೆಚ್ಚಿನ ವಿವರಗಳಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯನ್ನು, ಕಛೇರಿ ಕೆಲಸದ ಸಮಯದಲ್ಲಿ ಸಂಪರ್ಕಿಸಬಹುದು.

ಪಿ.ಆರ್. 803

ಕಾರ್ಯಪಾಲಕ ಇಂಜಿನಿಯರ್,
ಸಣ್ಣ ನೀರಾವರಿ ವಿಭಾಗ, ಚಿತ್ರದುರ್ಗ.

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ

## ಟೆಂಡರ್ ಕಾಲ ವಿಸ್ತರಣೆ ಅಧಿಸೂಚನೆ

**ಸಂಖ್ಯೆ: ಕಾನಿಅ/ರಾಹೆವಿ/ಚಿ/ಎಇ-1/ಟೆಂಡರು-ಪ್ರಕಟಣೆ ಅವಧಿ ವಿಸ್ತರಣೆ/ರಾಹೆ-63/ಸೇತುವೆ/2006-07/4288,**

**ದಿನಾಂಕ: 20ನೇ ಡಿಸೆಂಬರ್ 2006**

**ಉಲ್ಲೇಖ:** 1) ಈ ಕಛೇರಿ ಟೆಂಡರು ಪ್ರಕಟಣೆ ಸಂಖ್ಯೆ: ಎನ್‌ಹೆಚ್.ಡಿ/ಚಿ/ಸಇಂ-1/ಟೆಂ.ಪ್ರ./ರಾ.ಹೆ-63/ಬಿ.ಆರ್.ಜಿ. ಎಸ್‌ಪಿಎಲ್/ 06-07/1105, ದಿನಾಂಕ: 29.06.2006.

2) ಈ ಕಛೇರಿ ಟೆಂಡರು ಅವಧಿ ವಿಸ್ತರಣೆ ಪ್ರಕಟಣೆ ನಂ. ಎನ್‌ಹೆಚ್‌ಡಿ/ಸಿಟಿಎ/ಎಇ-1/ಟೆಂಡರು ಪ್ರಕಟಣೆ/ಎನ್‌ಹೆಚ್-63/ ಬಿ.ಆರ್.ಜಿ./ಎಸ್‌ಪಿಎಲ್., ರಿಪೇರ್ಸ್/2006-07/2588, ದಿನಾಂಕ: 04.09.2006.

3) ಈ ಕಛೇರಿ ಟೆಂಡರು ಅವಧಿ ವಿಸ್ತರಣೆ ಪ್ರಕಟಣೆ ನಂ.ಕಾನಿಅ/ರಾಹೆವಿ/ಚಿ/ಎಇ-1/ಟೆಂಡರು ಪ್ರಕಟಣೆ ಅವಧಿ ವಿಸ್ತರಣೆ / ರಾ ಹೆ-63/ಸೇತುವೆ/2006-07/3064, ದಿನಾಂಕ: 5.10.2006.

4) ಈ ಕಛೇರಿ ಟೆಂಡರು ಅವಧಿ ವಿಸ್ತರಣೆ ಪ್ರಕಟಣೆ ನಂ. ಕಾನಿಅ/ರಾಹೆವಿ/ಚಿ /ಎಇ-1/ಟೆಂಡರು ಪ್ರಕಟಣೆ ಅವಧಿ ವಿಸ್ತರಣೆ / ರಾ ಹೆ-63/ಸೇತುವೆ/2006-07/3738, ದಿನಾಂಕ: 14.11.2006.

ಮೇಲ್ಕಂಡ ಟೆಂಡರು ಪ್ರಕಟಣೆಯಲ್ಲಿನ ಕ್ರಮ ಸಂಖ್ಯೆ (1) ರ ಕಾಮಗಾರಿ, ರಾಷ್ಟ್ರೀಯ ಹೆದ್ದಾರಿ-63ರ ಅಂಕೋಲ-ಗುತ್ತಿ ಭಾಗದ ಕಿ.ಮೀ. 317.96ರ ಸೇತುವೆ ನಂ.318/2 ನ್ನು ಪುನರ್ ನಿರ್ಮಿಸುವ ಕಾಮಗಾರಿಯ ಟೆಂಡರು ಫಾರಂ ನೀಡುವ ಹಾಗೂ ಸ್ವೀಕರಿಸುವ ಅವಧಿಯನ್ನು ಈ ಕೆಳಗಿನಂತೆ ವಿಸ್ತರಿಸಲಾಗಿದೆ.

| ವಿಸ್ತರಣೆಗೊಳಿಸಿದ ದಿನಾಂಕಗಳು | | |
|---|---|---|
| ಅ) | ಅರ್ಜಿಗಳನ್ನು ಸ್ವೀಕರಿಸುವ ಹಾಗೂ ಖಾಲಿ ಟೆಂಡರ್ ಫಾರಂಗಳನ್ನು ನೀಡುವ ಕೊನೆಯ ದಿನಾಂಕ | 03.02.2007 ರವರೆಗೆ (ಕಛೇರಿ ವೇಳೆಯಲ್ಲಿ) |
| 1) | ತಾಂತ್ರಿಕ ಹಾಗೂ ಆರ್ಥಿಕ ಬಿಡ್‌ಗಳನ್ನು ಸ್ವೀಕರಿಸುವ ದಿನಾಂಕ | 05.02.2007 ಸಂಜೆ 4.00 ಗಂಟೆಯವರೆಗೆ |
| 2) | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 05.02.2007 ಸಂಜೆ 5.00 ಗಂಟೆಯವರೆಗೆ ಅಥವಾ ಮುಂದೆ ತಿಳಿಸುವ ಇನ್ನಾವುದೇ ಸಮಯ ಮತ್ತು ದಿನಾಂಕದಂದು. |
| 3) | ತಾಂತ್ರಿಕವಾಗಿ ಅರ್ಹವಾದ ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 12.02.2007 ಸಂಜೆ 5.00 ಗಂಟೆಯವರೆಗೆ ಅಥವಾ ಮುಂದೆ ತಿಳಿಸುವ ಇನ್ನಾವುದೇ ಸಮಯ ಮತ್ತು ದಿನಾಂಕದಂದು. |

ಮೇಲ್ಕಂಡ ಉಲ್ಲೇಖದಲ್ಲಿನ ಪ್ರಕಟಣೆಯಲ್ಲಿ ಇನ್ನುಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ.

ಕಾರ್ಯಪಾಲಕ ಇಂಜಿನಿಯರ್,
ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ.

**PUBLIC WORKS DEPARTMENT**

**(NATIONAL HIGHWAYS)**

**OFFICE OF THE EXECUTIVE ENGINEER, N.H.DIVISION, CHITRADURGA**

**TENDER EXTENTION NOTIFICATION**

**(TWO-COVER BID SYSTEM)**

**No. EE/NH/CTA/AE-1/T-Noti/Time extn.,/NH-63/BRG/R-Constr.,/2006-07/4288,**

**Dated: 20th December 2006**

**Reference:** 1) This office tender notification No.NHD/CT A/AE-1/TND-NOTI/NH-63/BRG-SPL, Rpr/ 06-07/1105 dated: 29.06.2006.

2) This office tender extension Notification No. NHD/CTA/AE-1/TND-NOTI/NH-63/BRG-Spl., Rpr.,/06-07/2588 dated: 04.09.2006.

3) This office tender extention notification No. EE/NH/CT A/AE-1/T-Noti/time extn;/NH 63/BRG/R-Constr/2006-07/3064 dated: 05.10.2006.

4) This office tender extention notification No. EE/NH/CT A/AE-1/T-Noti/time extn;/NH 63/BRG/R-Constr/2006-07/3738 dated: 14.11.2006.

The tenders called vide this office tender notification cited under reference (1) (2) and (3) above, in respect of work under slno (1) i.e. Reconstruction of Bridge No.318/2 at km 317.960 of NH 63 Ankola-Gooty section has been extended as under:-

| Schedule dates is as under | | Extended dates are as under |
|---|---|---|
| a) | Last date for receipt of application and issue of Blank tender forms | Up to 03.02.2007 (During working hours) |
| 1) | Date of receipt of Technical and Financial Bid | 05.02.2007 up to 4.00 PM |
| 2) | Opening of technical Bid | 05.02.2006 at 5.00 PM or any other date and time, which will be intimated in due course |
| 3) | date of opening of Financial bid of technically qualified tenders. | 12.02.2007 at 5.00 PM or any other Date and time, which will be intimated in due course. |

All other conditions in the Notification under reference (1) (2) (3) and (4) above are remains un changed.

**B. PRABHAKARA SETTY**

P.R. 810 Executive Engineer, NH Division Chitradurga.